Consequent to Notification at (3) above, Secretary, KERC vide letter read at (4) above has requested the Karnataka Governor's Secretariat to sanction revised Pension, Gratuity and Leave encashment to Sri Philipose Mathai, Former Chairman, KERC.

The matter pertaining to correctness of the Leave Encashment figure has been verified again by Government and Karnataka Governor's Secretariat and found that Leave Encashment of Rs.91,262/- was found to be correct in place of Rs.1,20,813/- Considering this and the above, Karnataka Governor's Secretariat vide letter read at (5) above has communicated sanction of the revised Pensionary benefits to Sri Philipose Mathai, Former Chairman, KERC as detailed below and further requested the Government to issue necessary Orders to this effect.

(a) Pension: Rs. 9,144/- per month
(Rupees Nine thousand one hundred forty four only)
(b) Gratuity: Rs. 89,166/-
(Rupees Eighty nine thousand one hundred sixty six only)
(c) Leave Encashment: Rs. 91,262-
(Rupees Ninety one thousand two hundred two only)

Accordingly, the following Order.

**Government Order No. EN 28 PSR 2009, Bangalore, Dated: 10th August 2009**

In the circumstances explained in the preamble, Government are pleased to accord approval to sanction the revised pension, gratuity and leave encashment as under to Sri Philipose Mathai (Former Chairman, KERC), as detailed below:

**a) Pension: Rs. 9,144/- per month**
**(Rupees Nine thousand one hundred forty four only)**
**(b) Gratuity: Rs. 89,166/-**
**(Rupees Eighty nine thousand one hundred sixty six only)**
**(c) Leave Encashment: Rs. 91,262-**
**(Rupees Ninety one thousand two hundred two only)**

By Order and in the name of Governor of Karnataka,

P.R. 1975

**S.J. SAMPATHKUMAR**

Under Secretary to Government, Energy Department

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹರಪನಹಳ್ಳಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವ ಅಂದಾಜು ರೂ.2950.00 ಲಕ್ಷಗಳ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ: ಮುಅ:ಅಶ್ರೇಕಾಅ1/ತಾಂಸ–8/754/2009–10 ದಿನಾಂಕ: 27.6.2009.

**ಪ್ರಸ್ತಾವನೆ:**

ಹರಪನಹಳ್ಳಿ ಪಟ್ಟಣವು ದಾವಣಗೆರೆ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, 2001ರ ಜನಗಣತಿಯಂತೆ 41,889 ಜನಸಂಖ್ಯೆ ಇದ್ದು, ಪ್ರಸ್ತುತ 45,000 ಇರುತ್ತದೆ. ಪ್ರಸ್ತುತ ಈ ಪಟ್ಟಣಕ್ಕೆ ತುಂಗಭದ್ರಾ ನದಿಯನ್ನು ಮೂಲವಾಗಿಟ್ಟುಕೊಂಡು ತಲಾ ದಿನಂ ಪ್ರತಿ 150 ಲೀಟರ್‌ನಂತೆ ಕುಡಿಯುವ ನೀರು ಒದಗಿಸುತ್ತಿದ್ದು, 2031ರಲ್ಲಿ ಊಹಿಸಲಾದ 89,467 ಜನಸಂಖ್ಯೆಗೆ ತಲಾ ದಿನಂಪ್ರತಿ 100 ಲೀಟರ್ ಕುಡಿಯುವ ನೀರು ಒದಗಿಸಲು ಯೋಜಿಸಲಾಗಿದೆ. ಹರಪನಹಳ್ಳಿ ಪಟ್ಟಣಕ್ಕೆ ಹಾಲಿ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಬಹುತೇಕ ಮನೆಯವರು ಸ್ವತಃ ಸೋಕ್ (soak) ಪಿಟ್ಟ್ ಅಳವಡಿಸಿಕೊಂಡಿರುತ್ತಾರೆ. ಹಾಗೂ ಇತರರು ತೆರೆದ ಪ್ರದೇಶಗಳನ್ನು ಉಪಯೋಗಿಸುತ್ತಿದ್ದಾರೆ. ಇನ್ನೂ ಕೆಲವರು ಗ್ರಾಮಸಾರವನ್ನು ತೆರೆದ ಚರಂಡಿಗಳ ಬಿಡುತ್ತಿರುವುದರಿಂದ, ಇದರಿಂದ ಪರಿಸರ ಮಾಲಿನ್ಯ ಮತ್ತು ಅಂತರ್ಜಲ ಮಾಲಿನ್ಯ ಉಂಟಾಗುತ್ತದೆ.

2) ಹರಪನಹಳ್ಳಿ ಪಟ್ಟಣಕ್ಕೆ ಒಳಚರಂಡಿ ಯೋಜನೆಯನ್ನು 2031ರಲ್ಲಿ ಅಂದಾಜಿಸಲಾದ ಜನಸಂಖ್ಯೆಗೆ ಅನುಗುಣವಾಗಿ ತಯಾರಿಸಲಾಗಿದೆ. 2009–10ನೇ ಸಾಲಿನ ದರಪಟ್ಟಿಯಂತೆ ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆಯನ್ನು ಕಲ್ಪಿಸುವ ಅಂದಾಜು ವೆಚ್ಚ ರೂ.2950.00 ಲಕ್ಷಗಳಲ್ಲಿ ಯೋಜನೆಯನ್ನು ತಯಾರಿಸಿ, ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಹಾಗೂ

ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಕೋರಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ 50% | ರೂ.1475.00 ಲಕ್ಷಗಳು |
| ಸರ್ಕಾರದ ಸಾಲ 30% | ರೂ. 885.00 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ 20% | ರೂ. 590.00 ಲಕ್ಷಗಳು |
| **ಒಟ್ಟು** | **ರೂ.2950.00 ಲಕ್ಷಗಳು** |

ಈ ಯೋಜನೆಯನ್ನು ಮಂಡಳಿಯ 2009–10ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಸೇರಿಸಿ, ಯೋಜನೆಯ 1/3ರಷು ಮೊತ್ತವನ್ನು ಅನುವು ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 16 ಯುಡಿಎಸ್ 2009, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹರಪನಹಳ್ಳಿ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜು ರೂ. 2950.00 ಲಕ್ಷಗಳ (ರೂ.ಎರಡು ಸಾವಿರದ ಒಂಭೈನೂರ ಐವತ್ತು ಲಕ್ಷ ಮಾತ್ರ) ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1) Water rates as proposed by KUWS&DB have to be implemented to meet O & M cost.
2) KTPP provisions, quality control and timely completion should ensured.
3) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
4) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.
5) ಸದರಿ ಕಾಮಗಾರಿಯನ್ನು ನಿಗದಿತ ಅವಧಿಯ ಒಳಗೆ ಪೂರ್ಣಗೊಳಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ FD 447 Exp-9:2009, ದಿನಾಂಕ:23.07.2009 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2138 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2009–10ನೇ ಸಾಲಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ/1/17/2009–10 ದಿನಾಂಕ 25.07.2009.

**ಪ್ರಸ್ತಾವನೆ:**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಸಿಬ್ಬಂದಿ ವೇತನಕ್ಕಾಗಿ 2009–10ನೇ ಸಾಲಿಗೆ ರೂ.28.39 ಲಕ್ಷಗಳ ಹಣವನ್ನು ಲೆಕ್ಕಶೀರ್ಷಿಕೆ 2205–103–0–18–101 (ಯೋಜನೇತರ) ಸಹಾಯಾನುದಾನ ಅಡಿಯಲ್ಲಿ ನಿಗಧಿಪಡಿಸಲಾಗಿದೆಯೆಂದು ತಿಳಿಸಿ, ಅಲ್ಲದೇ ಸದರಿ ಕ್ರಿಯಾಯೋಜನೆಯು ಅನುಮೋದಿತವಾಗಿದೆಯೆಂದು, ರೂ.28.39 ಲಕ್ಷಗಳನ್ನು ಒಂದೇ ಕಂತಿನಲ್ಲಿ ಆಯುಕ್ತರು, ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರ, ಹೊಸಪೇಟೆ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲು ಮಂಜೂರಾತಿ ಆದೇಶ ನೀಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 154 ಕೆಎಂಯು 2009, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ 2009–10ನೇ ಸಾಲಿನ ಸಿಬ್ಬಂದಿ ವೇತನಕ್ಕಾಗಿ ನಿಗದಿಪಡಿಸಿದ ರೂ.28.39 (ರೂಪಾಯಿ ಇಪ್ಪತ್ತೆಂಟು ಲಕ್ಷ ಮೂವತ್ತೊಂಬತ್ತು ಸಾವಿರ ಮಾತ್ರ) ಗಳನ್ನು ಒಂದೇ ಕಂತಿನಲ್ಲಿ ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಪೇಯೀಸ್ ರಸೀತಿ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು,

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಪಾರದರ್ಶಕ ಅಧಿನಿಯಮ 1999 ಮತ್ತು ಅದರ ನಿಯಮಗಳು 2000 ಗಳನ್ನು ಅನುಸರಿಸುವ ಷರತ್ತಿಗೊಳಪಟ್ಟು ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–103–0–18–101 (ಯೋಜನೇತರ) ಸಹಾಯಾನುದಾನ ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2127 ಐಎಫ್(ಬಿ&ಎ) 2009, ದಿನಾಂಕ 29.08.2009 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2141 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ದಾವಣಗೆರೆ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಪೀಠೋಪಕರಣ ಖರೀದಿಸಲು ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ:12:ದಾಸ್ತಾನು:2009–10, ದಿನಾಂಕ 04.08.2009.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ: 04.08.2009ರ ಪತ್ರದಲ್ಲಿ ದಾವಣಗೆರೆ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಅವಶ್ಯವಿರುವ ಅಲ್ಮೇರಾಗಳು, ಟೇಬಲ್‌ಗಳು, ರ್‍ಯಾಕ್‌ಗಳು, ಖುರ್ಚಿಗಳು ಮತ್ತು ಇತರೆ ಸಾಮಗ್ರಿಗಳ ಖರೀದಿಗೆ 2009–10ನೇ ಸಾಲಿನ ಆಯವ್ಯಯದಲ್ಲಿ ರೂ.1.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಸಹಾಯಕ ನಿರ್ದೇಶಕರು, ದಾವಣಗೆರೆ ಜಿಲ್ಲೆ ಇವರು ಕೋರಿದ್ದು, ಅದನ್ನು ರೂ.50,000/– ಗಳಿಗೆ ಸೀಮಿತಗೊಳಿಸಿ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ದಾವಣಗೆರೆ ಜಿಲ್ಲೆ ಇವರಿಗೆ ಬಿಡುಗಡೆ ಮಾಡುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 107 ಕಸನಿ 2009, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ದಾವಣಗೆರೆ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಯಲ್ಲಿ ಅವಶ್ಯವಿರುವ ಅಲ್ಮೇರಾಗಳು, ಟೇಬಲ್‌ಗಳು, ರ್‍ಯಾಕ್‌ಗಳು, ಖುರ್ಚಿಗಳು ಮತ್ತು ಇತರೆ ಸಾಮಗ್ರಿಗಳ ಖರೀದಿಗೆ **ರೂ.50,000.00** ಗಳನ್ನು (ರೂಪಾಯಿ ಐವತ್ತು ಸಾವಿರ ಮಾತ್ರ) ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ದಾವಣಗೆರೆ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು. ಹಾಗೂ ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಇತರೆ ಖರ್ಚು ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2068/ಐಎಫ್(ಬಿ&ಎ)2009 ದಿನಾಂಕ 26.08.2009ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2142 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಗುಲ್ಬರ್ಗಾ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಪೀಠೋಪಕರಣ ಖರೀದಿಸಲು ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ:14:ದಾಸ್ತಾನು:2009–10, ದಿನಾಂಕ 05.08.2009

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ: 05.08.2009ರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಯನ್ನು ಗುಲ್ಬರ್ಗಾ ಜಿಲ್ಲಾ ಸುವರ್ಣ ಸಾಂಸ್ಕೃತಿಕ ಸಮುಚ್ಛಯ ಕೇಂದ್ರದಲ್ಲಿ ಪ್ರಾರಂಭಿಸಿದ್ದು, ಹೊಸ ಕಟ್ಟಡದಲ್ಲಿ ವಿದ್ಯುತ್ ಬೋರ್ಡ್ ಟೇಬಲ್ ಹಾಗೂ ಕಿಟಕಿಗಳಿಗೆ ಕರ್ಟನ್ ಹಾಕಿಸಲು ಮತ್ತು ಕಛೇರಿಯ ಆಧುನೀಕರಣಕ್ಕಾಗಿ ಪ್ರಸ್ತುತ 2009–10ನೇ ಸಾಲಿನ ಆಯವ್ಯಯದಲ್ಲಿ ರೂ.50,000.00ಗಳನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಗುಲ್ಬರ್ಗಾ ಜಿಲ್ಲೆ ಇವರಿಗೆ ಬಿಡುಗಡೆ ಮಾಡುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 108 ಕಸನಿ 2009, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಗುಲ್ಬರ್ಗಾ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಯನ್ನು ಗುಲ್ಬರ್ಗಾ ಜಿಲ್ಲಾ ಸುವರ್ಣ ಸಾಂಸ್ಕೃತಿಕ ಸಮುಚ್ಛಯ ಕೇಂದ್ರದಲ್ಲಿ ಪ್ರಾರಂಭಿಸಿದ್ದು, ಹೊಸ ಕಟ್ಟಡದಲ್ಲಿ ವಿದ್ಯುತ್ ಬೋರ್ಡ್, ಟೇಬಲ್ ಹಾಗೂ ಕಿಟಕಿಗಳಿಗೆ ಕರ್ಟನ್ ಹಾಕಿಸಲು ಮತ್ತು ಕಛೇರಿಯ ಆಧುನೀಕರಣಕ್ಕಾಗಿ ರೂ.50,000.00 ಗಳನ್ನು (ರೂಪಾಯಿ ಐವತ್ತು ಸಾವಿರ ಮಾತ್ರ) ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಗುಲ್ಬರ್ಗಾ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು. ಹಾಗೂ ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ನಿರ್ದೇಶನ ಮತ್ತು ಆಡಳಿತ ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2067/ಐಎಫ್(ಬಿ&ಎ)2009 ದಿನಾಂಕ 25.08.2009ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2143

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯನ್ನು ಪುನರ್‌ರಚಿಸಿ, ಮುಂದುವರಿಸುವ ಬಗ್ಗೆ

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 133 ಕೆಎಂಯು 2004 ದಿನಾಂಕ 9–12–2005
2) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 146 ಕೆಎಂಯು 2007, ದಿನಾಂಕ 06.02.2008
3) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಆಪ್ರಾಸಂಪ/ಕಿ.ತ.ಸ./ 2009–10/146, ದಿನಾಂಕ 28.07.2009

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರದ ಆದೇಶದಲ್ಲಿ ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ತಜ್ಞರ ಸಮಿತಿಯನ್ನು ದಿನಾಂಕ 9–12–2005ರಿಂದ ಒಂದು ವರ್ಷದ ಅವಧಿಗೆ ರಚಿಸಲಾಗಿತ್ತು. ಸದರಿ ಸಮಿತಿಯನ್ನು ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ದಿನಾಂಕ 09.12.2006 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಇವರು 14 ಸದಸ್ಯರ ಪಟ್ಟಿಯನ್ನು ಅವರ ವಿಳಾಸಗಳೊಂದಿಗೆ ಸಲ್ಲಿಸಿ, ಸದರಿ ಸಮಿತಿಯನ್ನು ಎರಡು ವರ್ಷದ ಅವಧಿಯವರೆಗೆ ಪುನರ್‌ರಚಿಸಿ ಮುಂದುವರೆಸಬೇಕೆಂದು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 20 ಕೆಎಂಯು 2009, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2009**

ಕಿತ್ತೂರು ಪಾರಂಪರಿಕ ಪ್ರದೇಶದ ಅಭಿವೃದ್ಧಿ ಮತ್ತು ಸಂರಕ್ಷಣೆಗಾಗಿ ಸರ್ಕಾರದ ಆದೇಶ ಸಂಖ್ಯೆ: ಸಂಕಇ 133 ಕೆಎಂಯು 2004 ದಿನಾಂಕ 9–12–2005ರಲ್ಲಿ ರಚಿಸಿ ತದ ನಂತರ ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 146 ಕೆಎಂಯು

2007, ದಿನಾಂಕ 06.02.2008 ರನ್ವಯ ಎರಡು ವರ್ಷಗಳ ಅವಧಿಗೆ ವಿಸ್ತರಿಸಿರುವುದನ್ನು ಪುನರ್‌ರಚಿಸಿ ಅನುಬಂಧ – I ರಲ್ಲಿರುವ ಸದಸ್ಯರುಗಳನ್ನೊಳಗೊಂಡ ಸಮಿತಿಯನ್ನು ದಿನಾಂಕ 09.12.2008 ರಿಂದ ಜಾರಿಗೆ ಬರುವಂತೆ ಎರಡು ವರ್ಷಗಳ ಅವಧಿಗೆ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ಅನುಬಂಧ–I**

**(ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 20 ಕೆಎಂಯು 2009 ದಿನಾಂಕ: 07.09.2009)**

**ಕಿತ್ತೂರುಪ್ರದೇಶ ಪ್ರಾರಂಪರಿಕ ಸಮಿತಿ ಸದಸ್ಯರ ವಿವರ**

| ಕ್ರ. ಸಂ. | ಅಧಿಕಾರಿ/ಅಧಿಕಾರೇತರ ಹೆಸರು | |
|---|---|---|
| 1. | ಜಿಲ್ಲಾಧಿಕಾರಿಯವರು<br>ಬೆಳಗಾವಿ ಜಿಲ್ಲೆ, ಬೆಳಗಾವಿ | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು,<br>ಜಿಲ್ಲಾ ಪಂಚಾಯತ್, ಬೆಳಗಾವಿ | ಸದಸ್ಯರು |
| 3. | ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು,<br>ಬೆಳಗಾವಿ | ಸದಸ್ಯರು |
| 4. | ಅಧ್ಯಕ್ಷರು<br>ಗ್ರಾಮ ಪಂಚಾಯತ್, ಕಿತ್ತೂರು | ಸದಸ್ಯರು |
| 5. | ಅಧೀಕ್ಷಕ ಪುರಾತತ್ವ ಸರ್ವೇಕ್ಷಣಾ,<br>ಧಾರವಾಡ ವೃತ್ತ, ಧಾರವಾಡ | ಸದಸ್ಯರು |
| 6. | ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯ<br>ಆಯುಕ್ತರು/ ಪ್ರತಿ ನಿಧಿ, ಬೆಂಗಳೂರು | ಸದಸ್ಯರು |
| 7. | ಡಾ: ಶ್ರೀನಿವಾಸ ಪಾಡಿಗಾರ,<br>ಇತಿಹಾಸ ತಜ್ಞರು,<br>ಭಾರತ ಪ್ರಾಚೀನ ಇತಿಹಾಸ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | ಸದಸ್ಯರು |
| 8. | ಶ್ರೀಮತಿ ಡಾ. ಸ್ಮಿತಾ ಸುರೇಬಾನಕರ್,<br>ಇತಿಹಾಸತಜ್ಞರು<br>ಇತಿಹಾಸ ವಿಭಾಗ, ರಾಣಿ ಪಾರ್ವತಿ ದೇವಿ ಕಾಲೇಜು, ಬೆಳಗಾವಿ | ಸದಸ್ಯರು |
| 9. | ಜಂಟಿ ನಿರ್ದೇಶಕರು,<br>ಪರಿಸರ ತಜ್ಞರು, ಪರಿಸರ ಇಲಾಖೆ, ಕರ್ನಾಟಕ ಸರ್ಕಾರ ಬೆಳಗಾವಿ | ಸದಸ್ಯರು |
| 10. | ಮುಖ್ಯಸ್ಥರು,<br>ವಾಸ್ತುಶಿಲ್ಪ ವಿಭಾಗ, ಬಿ.ವಿ.ಬಿ. ಇಂಜಿನಿಯರಿಂಗ್ ಕಾಲೇಜು, ಹುಬ್ಬಳ್ಳಿ | ಸದಸ್ಯರು |
| 11. | ಉಪ ನಿರ್ದೇಶಕರು,<br>ನಗರ ವಿನ್ಯಾಸ ತಜ್ಞರು, ನಗರ ವಿನ್ಯಾಸ, ನಗರಾಭಿವೃದ್ಧಿ ಪ್ರಾಧಿಕಾರ, ಬೆಳಗಾವಿ | ಸದಸ್ಯರು |
| 12. | ಉಪ ನಿರ್ದೇಶಕರು,<br>ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ,<br>ಪ್ರವಾಸೋದ್ಯಮ ಕಟ್ಟಡ, ಧಾರವಾಡ | ಸದಸ್ಯರು |
| 13. | ಪ್ರೊ. ಅನಿಲ ಪ್ರಕಾಶ,<br>ಚಿತ್ರಕಲಾವಿದರು, ಪ್ರಾಚಾರ್ಯರು, ಬೆನನ್ ಸ್ಮಿತ್ ಚಿತ್ರಕಲಾ ಶಾಲೆ, ಬೆಳಗಾವಿ | ಸದಸ್ಯರು |
| 14. | ಉಪ ವಿಭಾಗಾಧಿಕಾರಿ,<br>ಬೈಲಹೊಂಗಲ | ಸದಸ್ಯ<br>ಕಾರ್ಯದರ್ಶಿ |

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2144 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಬಿಜಾಪುರ ಜಿಲ್ಲೆಯ ಆಲಮಟ್ಟಿಯಲ್ಲಿ ಹರ್ಡೇಕರ್ ಮಂಜಪ್ಪನವರ ಸ್ಮಾರಕ ನಿರ್ಮಾಣಕ್ಕಾಗಿ ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಇವರ ಪತ್ರ ಸಂ:ಕಸನಿ 13 ಸ್ಮಾರಕ 2009–10, ದಿ:30.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 3.07.2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ರವರು ಬಿಜಾಪುರ ಜಿಲ್ಲೆಯ ಆಲಮಟ್ಟಿಯಲ್ಲಿ ಹರ್ಡೇಕರ್ ಮಂಜಪ್ಪನವರ ಸ್ಮಾರಕ ನಿರ್ಮಿಸಲು ರೂ.100.00 ಲಕ್ಷಗಳನ್ನು 2009–10ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಕಲ್ಪಿಸುವುದಾಗಿ ಘೋಷಿಸಿದ್ದು, ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಇವರು ರೂ.100.00 ಲಕ್ಷಗಳಿಗೆ ಅಂದಾಜು ವೆಚ್ಚ ಪಟ್ಟಿ ಹಾಗೂ ನೀಲಿ ನಕ್ಷೆಯನ್ನು ಕಳುಹಿಸಿ ಕೊಟ್ಟಿರುತ್ತಾರೆ ಎಂದು ವರದಿ ಮಾಡಿ, ಈ ಯೋಜನೆಗೆ ಪ್ರಸಕ್ತ ಸಾಲಿನಲ್ಲಿ ರೂ.100 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2205–00–800–0–10–059 (ಯೋಜನೆ) ಕ್ರಿಯಾ ಯೋಜನೆ ಸಂಖ್ಯೆ:36 ಸ್ವಾತಂತ್ರ್ಯ ಹೋರಾಟಗಾರರ ಸ್ಮಾರಕ ಅಭಿವೃದ್ಧಿ ಅಡಿ ಭರಿಸಬಹುದೆಂದು ತಿಳಿಸುತ್ತಾ ಸದರಿ ಮೊತ್ತವನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 35 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2009**

ಬಿಜಾಪುರ ಜಿಲ್ಲೆಯ ಆಲಮಟ್ಟಿಯಲ್ಲಿ ಹರ್ಡೇಕರ್ ಮಂಜಪ್ಪನವರ ಸ್ಮಾರಕ ನಿರ್ಮಿಸಲು ರೂ.100.00 ಲಕ್ಷಗಳು (ರೂಪಾಯಿ ಒಂದು ನೂರು ಲಕ್ಷಗಳು ಮಾತ್ರ)ಗಳನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ, ಇವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಿ ಆದೇಶಿಸಿದೆ.

1. ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು ಹಾಗೂ ಈ ಯೋಜನೆಯನ್ನು ಇಲಾಖೆಯು ನಿಗದಿತ ಅವಧಿಯೊಳಗೆ ಮುಕ್ತಾಯಗೊಳಿಸಲು ಕ್ರಮ ವಹಿಸತಕ್ಕದ್ದು.
2. ಈ ಮೊತ್ತವು ಸದರಿ ಯೋಜನೆಗೆ ಒಂದು ಸಮಯದ ಅನುದಾನವಾಗಿರುತ್ತದೆ.
3. ಈ ಸ್ಮಾರಕದ ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ ಇವರ ಉಸ್ತುವಾರಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳ 2000ರ ಅಡಿ ಟೆಂಡರ್ ಪ್ರಕ್ರಿಯೆ ಪೂರೈಸಿ ತೆಗೆದುಕೊಳ್ಳಬೇಕೆಂದು ನಿರ್ವಹಣೆ ಆದೇಶಿಸಿದೆ.
4. ಈ ಸ್ಮಾರಕ ನಿರ್ಮಾಣದ ನಂತರ – ಸ್ಮಾರಕ ನಿರ್ವಹಣೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮಾಡತಕ್ಕದ್ದು.

ಈ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–800–0–10–059 (ಸ್ವಾತಂತ್ರ್ಯ ಹೋರಾಟಗಾರರ ಸ್ಮಾರಕ ಅಭಿವೃದ್ಧಿ) (ಯೋಜನೆ) ಅಡಿಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 844 ವೆಚ್ಚ–7/2009, ದಿನಾಂಕ: 07.09.2009 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಯೋಇ 76 ಜಶ 2009, ದಿನಾಂಕ: 26.08.09ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2182

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಇವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಕೈಗಾರಿಕಾಭಿವೃದ್ಧಿ ಆಯುಕ್ತರ ಪತ್ರದ ಸಂಖ್ಯೆ: ಆಡಳಿತ/ಸಿಬ್ಬಂಧಿ/ ಇ2/ 138/ 2007–08, ದಿನಾಂಕ: 11.03.2008.
2. ಸರ್ಕಾರದ ಆದೇಶ ಸಂಖ್ಯೆ: ವಾಕೈ 51 ಕೈಸೇವಿ 2008, ಬೆಂಗಳೂರು, ದಿ: 09.04.2008.
3. ಸರ್ಕಾರದ ಆದೇಶ ಸಂಖ್ಯೆ: ವಾಕೈ 44 ಕೈಸೇವಿ 2009, ಬೆಂಗಳೂರು, ದಿ: 07.03.2009.
4. ಕಾರಣ ಕೇಳುವ ನೋಟೀಸ್ ದಿ: 29.04.2009.
5. ಕಾರಣ ಕೇಳುವ ನೋಟೀಸಿಗೆ ಹೇಳಿಕೆ ದಿ: 16.05.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಶ್ರೀ ಹೆಚ್.ಎಸ್. ಪ್ರಕಾಶ್, ಹಿಂದಿನ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ಪ್ರಸ್ತುತ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಕೊಡಗು, ರವರು ದಿ: 06.03.2008 ರಂದು ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಕರೆಯಲಾದ ಇಲಾಖೆಯಲ್ಲಿನ ಜಂಟಿ ನಿರ್ದೇಶಕರ ಸಭೆಗೆ ಪೂರ್ವಾನುಮತಿ ಇಲ್ಲದೇ ಗೈರು ಹಾಜರಾಗಿರುವುದು ಹಾಗೂ ಸದರಿ ಸಭೆಗೆ ಯಾವುದೇ ಅಧಿಕಾರಿಯನ್ನು ನೇಮಿಸದೇ ಇರುವುದರಿಂದ ಜಿಲ್ಲೆಯ ಅಭಿವೃದ್ಧಿ ಯೋಜನೆಗಳ ಪ್ರಗತಿಯನ್ನು ಸಮರ್ಪಕವಾಗಿ ಪರಿಶೀಲಿಸಲು ಸಾಧ್ಯವಾಗದೇ ಇರುವ ಕಾರಣ ಸಹಾಯಧನ ಬಿಡುಗಡೆಗಾಗಿ ಅರ್ಹವಿರುವ ಘಟಕಗಳನ್ನು ತಪಾಸಣೆಮಾಡಿ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಸದರಿ ಅಧಿಕಾರಿಗೆ ಸೂಚಿಸಲಾಗಿದ್ದು ಹಾಗೂ ಸದರಿ ಅಧಿಕಾರಿಯವರು ನಿಗಧಿತ ಅವಧಿಯಲ್ಲಿ ಪ್ರಸ್ತಾವನೆಯನ್ನು ಸಲ್ಲಿಸದೇ ಇರುವ ಕಾರಣ ನಂತರ ಸಹಾಯಧನ ಮಂಜೂರಾತಿ ವಿವರಗಳನ್ನು ನೀಡುವಲ್ಲಿ ಕೆಲವೊಂದು ನ್ಯೂನತೆ ಕಂಡುಬಂದ ಹಿನ್ನೆಲೆಯಲ್ಲಿ ಸದರಿಯವರಿಗೆ ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ವಿವರಣೆ ನೀಡುವಂತೆ ಸೂಚಿಸಿದರು ಸಹ ವಿವರಣೆಯನ್ನು ನೀಡದೇ ಇರುವ ಬಗ್ಗೆ ಹಾಗೂ ಜಿಲ್ಲೆಯಲ್ಲಿ ಅನುಷ್ಠಾನಗೊಳಿಸಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಗತಿಯಲ್ಲಿಯೂ ಸಮರ್ಪಕವಾಗಿ ಕಾರ್ಯನಿರ್ವಹಿಸದೇ ಪಿ.ಎಮ್.ಆರ್.ವೈ. ಸುವರ್ಣ ಕಾಯಕ ಉದ್ಯೋಗ ಯೋಜನೆ ಕಛೇರಿಯ ಸಾಮಾನ್ಯ ಹಾಜರಾತಿಯಲ್ಲಿ ನ್ಯೂನತೆ ಕಂಡುಬಂದಿರುವುದರಿಂದ ಮತ್ತು ಸದರಿ ಅಧಿಕಾರಿಯು ವೈದ್ಯಕೀಯ ರಜೆಯನ್ನು ಸಲ್ಲಿಸಿದ್ದು ರಜೆಯ ಮೇಲೆ ತೆರಳುವ ಮೊದಲು ಕೇಂದ್ರ ಕಛೇರಿಗೆ ತಿಳಿಸದೇ ಹಾಗೂ ರಜೆಯ ಅವಧಿಯಲ್ಲಿ ಕಾರ್ಯನಿರ್ವಹಿಸಲು ಪ್ರಭಾರ ವ್ಯವಸ್ಥೆಯನ್ನು ಮಾಡದೇ ರಜೆಯ ಮೇಲೆ ತೆರಳುವ ಬಗ್ಗೆ ಸ್ಪಷ್ಟೀಕರಣವನ್ನು ಕೋರಿದರೂ ಉತ್ತರಿಸದೇ ಇದ್ದು, ಮುಂತಾದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಅನುವಾಗುವಂತೆ ಅಮಾನತ್ತಿನಲ್ಲಿಡಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ (2) ರ ಆದೇಶದಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್ ಹಿಂದಿನ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ರವರು ಇಲಾಖಾ ಜಂಟಿ ನಿರ್ದೇಶಕರ ಸಭೆಗೆ ಪೂರ್ವಾನುಮತಿ ಇಲ್ಲದೇ ಗೈರು ಹಾಜರಾಗಿರುವುದು ಸಹಾಯಧನ ಬಿಡುಗಡೆಯಲ್ಲಿ ನ್ಯೂನತೆ ಜಿಲ್ಲೆಯ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಗತಿಯಲ್ಲಿ ಕುಂಠಿತ ಹಾಗೂ ಕೆಲಸ ಕಾರ್ಯಗಳ ನಿರ್ವಹಣೆಯಲ್ಲಿ ಅಸಡ್ಡೆ, ನಿರಾಸಕ್ತಿ ಹಾಗೂ ಬೇಜವಾಬ್ದಾರಿತನ ತೋರಿರುವುದು ಕಂಡುಬಂದಿದ್ದು ಇವರ ಕಾರ್ಯನಿರ್ವಹಣೆಯು ತೃಪ್ತಿಕರವಾಗಿಲ್ಲದೇ ಇರುವ ಕಾರಣ ಮುಂತಾದ ಆರೋಪಗಳ ಬಗ್ಗೆ ಇವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (3) ರ ಸರ್ಕಾರದ ಆದೇಶದಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಹಿಂದಿನ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ/ ಶಿಸ್ತು ಕ್ರಮಗಳನ್ನು ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 10 (5) (ಸಿ) ರ ಅನ್ವಯ ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಲಾಗಿತ್ತು.

ಮೇಲೆ ಓದಲಾದ (4) ರ ನೋಟೀಸಿನಲ್ಲಿ ಶ್ರೀ ಹೆಚ್.ಎಸ್. ಪ್ರಕಾಶ್, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಎಸಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ ಕಾರಣ ಕೇಳುವ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿ ಇನ್ನಿತರೆ ಅನುಬಂಧಗಳನ್ನು ದಿ: 29.04.2009 ರಂದು ಜಾರಿಗೊಳಿಸಲಾಗಿತ್ತು.

ಮೇಲೆ ಓದಲಾದ (5) ರ ಪತ್ರದಲ್ಲಿ ಕಾರಣ ಕೇಳುವ ನೋಟೀಸಿಗೆ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿ ತನ್ನ ಮೇಲೆ ಹೊರಡಿಸಿರುವ ಆರೋಪಗಳಿಂದ ಮುಕ್ತರನ್ನಾಗಿ ಮಾಡಿ ವಿಚಾರಣೆಯನ್ನು ಕೈಬಿಡಲು ಕೋರಿದ್ದಾರೆ. ಸರ್ಕಾರವು ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 51 ಕೈಸೇವಿ 2008, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಶ್ರೀ ಹೆಚ್.ಎಸ್. ಪ್ರಕಾಶ್, ಜಂಟಿ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಜಿಲ್ಲಾ ಕೈಗಾರಿಕಾ ಕೇಂದ್ರ, ಬೀದರ್, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಜಂಟಿ ನಿರ್ದೇಶಕರ ಸಭೆಗೆ ಪೂರ್ವಾನುಮತಿ ಇಲ್ಲದೇ ಗೈರು ಹಾಜರಾಗಿರುವುದು ಜಿಲ್ಲೆಯ ಅಭಿವೃದ್ಧಿ ಯೋಜನೆಗಳ ಪ್ರಗತಿಯನ್ನು ಸಮರ್ಪಕವಾಗಿ ಪರಿಶೀಲಿಸದೇ ಇರುವುದು, ಸಹಾಯಧನ ಬಿಡುಗಡೆಗಾಗಿ ಅರ್ಹವಿರುವ ಘಟಕಗಳನ್ನು ತಪಾಸಣೆ ಮಾಡದೇ ಇರುವುದು, ಸಹಾಯಧನ ಮಂಜೂರಾತಿಯಲ್ಲಿ ನ್ಯೂನ್ಯತೆ ಕಂಡುಬರುವುದು, ಪಿ.ಎಮ್.ಆರ್.ವೈ.

ಸುವರ್ಣ ಕಾಯಕ ಉದ್ಯೋಗ ಯೋಜನೆಯಲ್ಲಿ ನ್ಯೂನ್ಯತೆ ಕಂಡುಬಂದಿರುವುದು, ಕಾರ್ಯಕ್ರಮಗಳನ್ನು ನಿರ್ವಹಿಸುವಲ್ಲಿ, ಅನುಷ್ಠಾನಗೊಳಿಸುವಲ್ಲಿ ನಿಯಮಾವಳಿಗಳನ್ನು ಪಾಲಿಸದೇ ಕರ್ತವ್ಯ ಲೋಪ, ಎಸಗಿರುವುದರಿಂದ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ನಂ. 239/1, ನಾಗಶ್ರೀ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಬಿ. ಮಹೇಶ್, ಉಪ ನಿರ್ದೇಶಕರು, (ಆಡಳಿತ) ಕೇಂದ್ರ ಕಛೇರಿ, ಬೆಂಗಳೂರು, ಇವರನ್ನು ಅಥವಾ ಇವರ ಸ್ಥಾನದಲ್ಲಿ ವರ್ಗಾವಣೆಗೊಂಡು ಕರ್ತವ್ಯ ನಿರ್ವಹಿಸುವ ಅಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು, ವಿಚಾರಣೆಯನ್ನು ಕೈಗಾರಿಕಾಭಿವೃದ್ಧಿ ಆಯುಕ್ತರ ಕಛೇರಿಯಲ್ಲಿ ಅಥವಾ ಅವರು ಗುರುತಿಸಿ ನಿಗಧಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಶೀಘ್ರಲಿಪಿಗಾರರು/ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯವರಿಗೆ ಸೂಚಿಸಲಾಗಿದೆ.

ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಈ ಸಂಬಂಧ ವಿಚಾರಣಾಧಿಕಾರಿಗಳಿಗೆ ನಿಗಧಿತ ಸಂಚಿತ ಸಂಭಾವನೆಯಾದ ರೂ. 8,000/– (ರೂಪಾಯಿ ಎಂಟು ಸಾವಿರ ರೂಪಾಯಿಗಳು ಮಾತ್ರ) ಗಳು ಹಾಗೂ ವಾಹನ ಭತ್ಯೆ ರೂ. 1,500/– (ರೂಪಾಯಿ ಒಂದು ಸಾವಿರದ ಐದು ನೂರು ರೂಪಾಯಿಗಳು ಮಾತ್ರ)ಗಳನ್ನು ಸಂಬಂಧಿಸಿದ ಕಛೇರಿಯ ಲೆಕ್ಕ ಶೀರ್ಷಿಕೆಯಿಂದ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು. ವಿಚಾರಣಾಧಿಕಾರಿಗಳು 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಪಿ.ಆರ್. 2159

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಸೇವೆಗಳು/ಸಮನ್ವಯ)

**ವಿಷಯ:** ಶ್ರೀ ಎಸ್.ಆರ್.ನಿಡಗುಂದಿ, ಉಪನಿರ್ದೇಶಕರು (ಅಮಾನತ್ತು), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿಯಿರಿಸಿ, ಅಮಾನತ್ತು ತೆರವುಗೊಳಿಸುವ ಕುರಿತು.

**ಓದಲಾಗಿದೆ:**
1) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅ.ಸ.ಪತ್ರ ಸಂಖ್ಯೆ:ಗಭೂಇ/ಆ.ಶಾ./ 2008–09/3622, ದಿನಾಂಕ:07.01.2009.
2) ದಿ:19–01–09 ರ ಸರ್ಕಾರಿ ಆದೇಶ ಸಂಖ್ಯೆ:ಸಿಐ 04 ಎಂಜಿಎಸ್ 2009.
3) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅ.ಸ.ಪತ್ರ ಸಂಖ್ಯೆ:ಗಭೂಇ/ ಸಿಬ್ಬಂದಿ ಅ1/2009–10/2725, ದಿನಾಂಕ:29.08.2009.

**ಪ್ರಸ್ತಾವನೆ:**

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ (1)ರಲ್ಲಿ ಓದಲಾದ ದಿ:07–01–09 ರ ಪತ್ರದಲ್ಲಿ ಸೇಡಂ ನ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕಛೇರಿಯಲ್ಲಿ ಉಪನಿರ್ದೇಶಕರು, ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎಸ್.ಆರ್.ನಿಡಗುಂದಿ, ಇವರು ಕರ್ತವ್ಯ ನಿರ್ಲಕ್ಷ್ಯತೆಯನ್ನು ತೋರಿಸಿ, ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಮತ್ತು ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಲು ಕಾರಣಕರ್ತರಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರನ್ನು ಅಮಾನತ್ತುಗೊಳಿಸಲು ಶಿಫಾರಸ್ಸು ಮಾಡಿದ್ದರ ಮೇರೆಗೆ, ಮೇಲೆ (2) ರಲ್ಲಿ ಓದಲಾದ ದಿ:19–01–09 ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಆರ್.ನಿಡಗುಂದಿ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಸೇಡಂ ಇವರನ್ನು, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಸೇವೆಯಿಂದ ಅಮಾನತ್ತುಗೊಳಿಸಿತ್ತು.

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ (3) ರಲ್ಲಿ ಓದಲಾದ ದಿ:29.08.2009 ರ ಅರೆ ಸರ್ಕಾರಿ ಪತ್ರದಲ್ಲಿ, ಶ್ರೀ ಎಸ್.ಆರ್.ನಿಡಗುಂದಿ, ಉಪನಿರ್ದೇಶಕರು (ಅಮಾನತ್ತು), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ ಉಪನಿರ್ದೇಶಕರು, ಕಾರವಾರ, ಇಲ್ಲಿಗೆ ನಿಯುಕ್ತಿಗೊಳಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಐ.04.ಎಂಜಿಎಸ್.2009, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಎಸ್.ಆರ್.ನಿಡಗುಂದಿ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ವಿರುದ್ಧದ ಆರೋಪಗಳ ಕುರಿತು ನಿಯಮಾನುಸಾರ ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಿದೆ.

ಅಮಾನತ್ತು ತೆರವುಗೊಳಿಸಿದ ನಂತರ, ಶ್ರೀ ಎಸ್.ಆರ್.ನಿಡಗುಂದಿ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರನ್ನು ಉಪನಿರ್ದೇಶಕರು, ಕಾರವಾರ, ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಶ್ರೀ ಎಸ್.ಆರ್.ನಿಡಗುಂದಿ ಇವರು ಸೇರಿಕೆ ಕಾಲ, ಪ್ರಯಾಣಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2160 **ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ(ಗಣಿ) ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ:** ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯಭೂವಿಜ್ಞಾನಿ (ಖನಿಜ)(ಪ್ರ) (ಅಮಾನತ್ತು), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಬಾಕಿಯಿರಿಸಿ, ಅಮಾನತ್ತು ತೆರವುಗೊಳಿಸುವ ಕುರಿತು.

**ಓದಲಾಗಿದೆ:**
1) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅ.ಸ.ಪತ್ರ ಸಂಖ್ಯೆ:ಗಭೂಇ/ಆ.ಶಾ./2008–09, ದಿನಾಂಕ:16.03.2009.
2) ದಿ:17–03–09 ರ ಸರ್ಕಾರಿ ಆದೇಶ ಸಂಖ್ಯೆ:ಸಿಐ 25 ಎಂಜಿಎಸ್ 2009.
3) ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಅ.ಸ.ಪತ್ರ ಸಂಖ್ಯೆ:ಗಭೂಇ/ಸಿಬ್ಬಂದಿ ಅ1/2009–10/2725, ದಿನಾಂಕ:29.08.2009.

**ಪ್ರಸ್ತಾವನೆ:**

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ (1)ರಲ್ಲಿ ಓದಲಾದ ದಿ:16–03–09ರ ಪತ್ರದಲ್ಲಿ ಬಳ್ಳಾರಿಯ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕಛೇರಿಯಲ್ಲಿ ಹಿರಿಯಭೂವಿಜ್ಞಾನಿ(ಖನಿಜ)(ಪ್ರ) ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್.ಪಿ. ಮಲ್ಲೇಶ್, ಇವರು, ಕರ್ತವ್ಯ ನಿರ್ಲಕ್ಷ್ಯತೆಯನ್ನು ತೋರಿಸಿ, ತಮ್ಮ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಇವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿಯಿರಿಸಿ, ಇವರನ್ನು ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡಿದ್ದರ ಮೇರೆಗೆ, ಮೇಲೆ (2) ರಲ್ಲಿ ಓದಲಾದ ದಿ:17–03–09ರ ಸರ್ಕಾರಿ ಆದೇಶದಲ್ಲಿ ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯ ಭೂವಿಜ್ಞಾನಿ (ಖನಿಜ)(ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬಳ್ಳಾರಿ ಇವರನ್ನು, ಇವರ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರ ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಸೇವೆಯಿಂದ ಅಮಾನತ್ತುಗೊಳಿಸಿತ್ತು.

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ (3) ರಲ್ಲಿ ಓದಲಾದ ದಿ:29.08.2009 ರ ಅರೆ ಸರ್ಕಾರಿ ಪತ್ರದಲ್ಲಿ, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯಭೂವಿಜ್ಞಾನಿ(ಖನಿಜ)(ಪ್ರ) (ಅಮಾನತ್ತು), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ ಹಿರಿಯಭೂವಿಜ್ಞಾನಿ, ದಾವಣಗೆರೆ (ನೂತನ ಕಛೇರಿ), ಇಲ್ಲಿಗೆ ನಿಯುಕ್ತಿಗೊಳಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಐ.25.ಎಂಜಿಎಸ್.2009, ಬೆಂಗಳೂರು, ದಿನಾಂಕ: 8ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯಭೂವಿಜ್ಞಾನಿ(ಖನಿಜ) (ಪ್ರ), ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರ ವಿರುದ್ಧದ ಆರೋಪಗಳ ಕುರಿತು ನಿಯಮಾನುಸಾರ ವಿಚಾರಣೆಯನ್ನು ಕಾಯ್ದಿರಿಸಿ, ಅಮಾನತ್ತನ್ನು ತೆರವುಗೊಳಿಸಿದೆ.

ಅಮಾನತ್ತು ತೆರವುಗೊಳಿಸಿದ ನಂತರ, ಶ್ರೀ ಹೆಚ್.ಪಿ. ಮಲ್ಲೇಶ್, ಹಿರಿಯಭೂವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರನ್ನು ಹಿರಿಯ ಭೂವಿಜ್ಞಾನಿ, ದಾವಣಗೆರೆ (ನೂತನ ಕಛೇರಿ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಿದೆ.

ಶ್ರೀ ಹೆಚ್.ಪಿ. ಮಲ್ಲೇಶ್ ಇವರು ಸೇರಿಕೆ ಕಾಲ, ಪ್ರಯಾಣಭತ್ಯೆ ಮತ್ತು ಇತರೆ ಭತ್ಯೆಗಳನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2161 **ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ(ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## COMMERCE AND INDUSTRIES SECRETARIAT

**Sub:** Sanction of land to M/s JSW Steel Ltd., Bellary to fill up the discrepancies of land allotment in earlier Govt. Orders – Reg.

**Read:**
1. Govt. Order No. CI 153 SPI 2003 dated 22.07.2003.
2. Govt. Order No. CI 82 SPI 2005 dated 06.08.2007.
3. M/s JSW Steel Ltd. letter No. JSW/L&L/2007-08 dated 11.12.2007.
4. Letter No. ಕಂ:ಭೂಸ್ವಾ:106:07-08 dated 23.03.2009 of Deputy Commissioner, Bellary District.
5. M/s JSW Steel Ltd. letter No. JSW/Blr dated 02.05.2009.
6. Letter No. VNSL/Land/2009-10 dated 12.05.2009 of Managing Director, Vijayanagar Steel Limited.

**Preamble:**

Land to an extent of 615 acres was allotted to M/s JSW Steel Ltd. vide Govt. Order No. CI 153 SPI 2003 dated 22.07.2003 read at (1) above for slime disposal at Rs. 45,000/- per acre. Likewise, land to an extent of 1700 acres was allotted to M/s JSW Steel Ltd. vide Govt. Order No. CI 82 SPI 2005 dated 06.08.2007 read at (2) above for 10 MT expansion project at Rs.1,22,199/- per acre.

M/s JSW Steel Ltd. vide their letter dated 11.12.2007 read at (3) above has intimated that there are discrepancies in the lands allotted to their unit on lease-cum-sale basis, which was allotted vide Government Orders read at (1) & (2) above.

As per request of the said unit, letter No. CI 314 SPI 2002 dated 24.01.2008 was addressed to the Deputy Commissioner, Bellary District for examining the discrepancies and to survey land at Sy. Nos., where discrepancies are noticed. Similarly, the Managing Director, Vijayanagar Steel Ltd. (VNSL) has also written a letter to Deputy Commissioner, Bellary District vide letter No.VNSL/Land/2007-08 dated 20.12.2007.

The Deputy Commissioner, Bellary District vide his letter dated 23.03.2009 read at (4) above has intimated that in lease-cum-sale agreement made on 24.10.2007 by M/s JSW Steel Ltd., the land at Toranagallu village, Sy. No. 382(P) 194.50 acres and 9.44 acres totaling to 203.94 acres handed over to M/s JSW Steel Ltd. by Commerce & Industries Department. But as per Khata extract of Toranagallu village Sy. No. 382, 1041.82 acres of land belongs to Indian Army, wherein there is prohibition for taking any of the activities.

Further there is discrepancy (short fall) to an extent of 72.25 acres at various Sy. Nos. indicated at Annexure-II at Yerabanahalli and Musenayakanahalli which was allotted in the lease-cum-sale agreement made on 15.04.2004.

The Deputy Commissioner, Bellary District has recommended for allotment of alternative land to an extent of 203.94 acres and 72.25 acres totaling to 276.19 acres to M/s JSW Steel Ltd.

The Managing Director of Vijayanagar Steel Ltd. vide his letter dated 12.05.2009 read at (6) above has also intimated that as per their records, land to an extent of 242.92 acres is available with Government.

We have to make rectifications in the lease-cum-sale agreement made on 15.04.2004 for allotment of 615 acres of land for slime disposal. In the said lease-cum-sale agreement, the land to an

extent of 72.25 acres, has to be deducted at various Sy. Nos. indicated in Annexure-II and also 9.44 acres will have to be deducted at Sy.No. 382(P), Toranagallu village.

Likewise, we have to make rectifications in the lease-cum-sale agreement made on 24.10.2007 for allotment of 1700 acres of land for 10 MT expansion project of M/s JSW Steel Ltd. In the said lease-cum-sale agreement, land to an extent of 194.50 acres will have to be deducted from Sy. No. 382(P) of Toranagallu village.

Hence the following order.

**Government Order No. CI 314 SPI 2007, Bangalore, Dated: 28th August 2009**

Under the circumstances explained above, land to an extent of 242.92 acres is allotted to M/s JSW Steel Ltd. out of balance land available which was acquired for erstwhile Vijayanagar Steel Ltd. for filling up the discrepancies in earlier allotments made in Govt. Orders No. CI 153 SPI 2003 dated 22.07.2003 and No. CI 82 SPI 2005 dated 06.08.2007 at a cost of Rs.1,22,199/- per acre. The Sy. Nos. and extent of land for allotment of 242.92 acres are indicated in the Annexure-I.

72.25 acres of land at various Sy.Nos. indicated in Annexure-II and 9.44 acres at Sy. No. 382(P) will have to be deducted in the lease-cum-sale agreement made on 15.04.2004 for allotment of 615 acres of land for slime disposal. The rectification deed will have to be made accordingly with M/s JSW Steel Ltd.

194.50 acres of land will have to be deducted at Sy.No. 382(P) in lease-cum-sale agreement made on 24.10.2007 for allotment of 1700 acres of land for 10 MT expansion project. The rectification deed will have to be made accordingly with M/s JSW Steel Ltd.

M/s JSW Steel Ltd. will have to make lease cum sale agreement for the lands allotted to an extent of 242.92 acres in lieu of discrepancies in earlier allotment of land. The terms and conditions as stipulated in earlier lease-cum-sale agreements shall be adopted.

The financial implications are indicated below:

| | | |
|---|---|---|
| I.(a) 72.25 Acres at Rs.45,000/- per acre | Covered under lease cum sale document I | 32,51,250 |
| (b) 9.44 Acres (Sy.No. 382(P)) at Rs. 45,000/- per acre | | 4,24,800 |
| (c) 194.5 Acres (Sy.No. 382(P)) at Rs.1,22,199/- per acre | Covered under lease cum sale document II | 2,37,67,705 |
| | | **Rs.2,74,43,755** |
| II. The value of the land payable for 242.92 acres at Rs.1,22,199/- | | **Rs.2,96,84,581** |
| III. The difference value of the land payable by JSW to Government | | **Rs.22,40,825** |

M/s JSW Steel Ltd. has to remit an amount of Rs.22,40,825/- (Rupees twenty two lakhs forty thousand eight twenty five only) to the Head of Account "4852-02-800-0-01".

Desk Officer (Technical Cell), Commerce & Industries Department is authorized to sign the lease-cum-sale agreement, rectification of lease-cum-sale agreement and possession certificate.

By order and in the name of Governor of Karnataka

**APARNA PAVATE**

Desk Officer (Technical Cell), Commerce & Industries Department

**ANNEXURE-I**

**for Govt. Order No. CI 314 SPI 2007 dated 28th August 2009**

**SY. NOS. AND EXTENT OF LAND FOR ALLOTMENT OF 242.92 ACRES OF LAND TO M/S JSW STEEL LTD.**

| Village | Survey No. | Extent (In acres) |
|---|---|---|
| Musenayakanahalli | 18 | 1.98 |
| | 20 | 7.11 |

| Village | Survey No. | Extent (In acres) |
|---|---|---|
| | 21 | 7.00 |
| | 22/1 | 6.80 |
| | 22/2 | 9.00 |
| | 23 | 10.65 |
| | 28/1 | 5.63 |
| | 28/2 | 4.85 |
| | 45 | 93.36 |
| | 46 | 8.06 |
| | 47 | 5.33 |
| | 49 | 7.90 |
| | 50 | 7.00 |
| | 58 | 68.25 |
| **GRAND TOTAL** | | **242.92 Acres** |

**APARNA PAVATE**
Desk Officer (Technical Cell), Commerce & Industries Department

**ANNEXURE-II**

**for Govt. Order No. CI 314 SPI 2007 dated 28th August 2009**

**Statement indicating the survey number and extent of lands indicating short fall in extent areas**

| Village | Survey No. | Area allotted to JSW for Slime Pond (as per Lease cum Sale Deed dated 26.5.2004) (In Acres) | Area as per RoR (Pahani) (In Acres) | Shortfall in land (In Acres) |
|---|---|---|---|---|
| Yerabanahalli | 10 | 11.60 | 8.57 | 3.03 |
| ” | 17 | 16.80 | 12.25 | 4.55 |
| ” | 18 | 8.03 | 3.60 | 4.43 |
| ” | 20 | 7.56 | 6.94 | 0.62 |
| ” | 21 | 7.00 | 4.04 | 2.96 |
| ” | 23 | 10.65 | 4.13 | 6.52 |
| ” | 25 | 16.12 | 3.22 | 12.90 |
| ” | 28 | 19.00 | 13.55 | 5.45 |
| ” | 29 | 20.48 | 16.21 | 4.27 |
| ” | 31 | 13.00 | 12.18 | 0.82 |
| ” | 40 | 3.50 | 0.90 | 2.60 |
| ” | 41A | 22.70 | 15.98 | 6.72 |
| ” | 47 | 7.43 | 5.23 | 2.20 |
| Musenayakanahalli | 53 | 17.42 | 6.40 | 11.02 |
| ” | 54 | 8.99 | 4.95 | 4.04 |
| ” | 57 | 3.92 | 3.80 | 0.12 |
| **Total** | | **194.20** | **121.95** | **72.25** |

**RoR – Records of Rights (Pahani)**

**APARNA PAVATE**

P.R. 2107 Desk Officer (Technical Cell), Commerce & Industries Department

**Sub:** Selection of Organisations for providing services of Event Management, Media Consultancy and Knowledge Partnership for Global India business Meet 2010 – Approval for Selection of preferred Organisation-reg.

**Read:** 1. G.O.NO.CI 192 SPI 2009dated 06.08.2009.
2. ADDENDUM No.CI 192 SPI 2009 dated 26.8.2009.

**Preamble:**

Karnataka Udyog Mitra, the Nodal Agency for organizing Global Investors Meet 2010 proposes to engage the services of reputed organizations for providing services of Event Management, Media Consultancy and Knowledge Partnership for Global Investors Meet 2010.

TECSOK was entrusted with the work of calling for EOIs, preparing the tender documents, receiving the duly filled technical and financial bids from prospective tenderers, assisting Karnataka Udyog Mitra, Scrutiny Committee and Selection Committee for evaluation of technical bids and combined evaluation of technically qualified financial bids.

After following all procedures M/s JWT, Bangalore [Lead Partner of the Consortium & Media Consultant, M/s IPAN being the Knowledge Partner and M/s Encompass, the Event Manager] is selected for Media Consultancy, Knowledge Partnership and Event Management for Global Investors Meet 2010.

Hence the following order.

**Government Order No: CI 215 SPI 2009, Bangalore, Dated: 9th September 2009**

In the circumstances explained above, approval is hereby accorded for the selection of M/s JWT, Bangalore [Lead Partner of the Consortium & Media Consultant, M/s IPAN being the Knowledge Partner and M/s Encompass, the Event Manager] as Media Consultant, Knowledge Partner and Event Manager for Global Investors Meet 2010.

The said organization will have to participate and contribute in all the 4 main Task Forces and 12 sector wise Task Force Committee meetings as Media Consultant/ Knowledge Partner/ Event Manager as it is nominated as member of the said Task Forces constituted in the Government Orders read at [1] & [2] above.

The Terms of reference etc., will be issued separately.

By order and in the name of the Governor of Karnataka

P.R. 2162

**APARNA PAVATE**

Desk Officer (Technical Cell), Commerce & Industries Dept.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಸುಟ್ಟಟ್ಟಿ(ಅಸಂಗಿ ತೋಟ) ಹತ್ತಿರ ಬಾಂದಾರ ನಿರ್ಮಾಣ ಕಾಮಗಾರಿಯ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ದಿನಾಂಕ 25/05/2006ರ ಆದೇಶ ಸಂಖ್ಯೆ: ಸನೀಇ 65 ನಯೋಕಾ 2006
2. ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 02/12/08 ರಂದು ಕೊನೆಗೊಂಡ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಎಇ–1/ 2008–09/6345.

**ಪ್ರಸ್ತಾವನೆ:**

ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಸುಟ್ಟಟ್ಟಿ(ಅಸಂಗಿ ತೋಟ) ಹತ್ತಿರ ಬಾಂದಾರ ನಿರ್ಮಾಣ ಕಾಮಗಾರಿಯ 43.75 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 25/05/2006ರ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ ಹಾಗೂ 2006–07ನೇ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತ ರೂ.47,99,754–57ಗಳ ಮೇಲೆ ಶೇ.5.95ರಷ್ಟು ಹೆಚ್ಚುವರಿ ಮೊತ್ತಕ್ಕೆ ಅಂದರೆ ರೂ.51,91,239–68ಗಳಿಗೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ವಹಿಸಲಾಗಿತ್ತು.

2) ಕಾಮಗಾರಿಯು ಜಾರಿಯಲ್ಲಿದ್ದ ಸಂದರ್ಭದಲ್ಲಿ ಮುಖ್ಯ ಇಂಜಿನಿಯರ್‌ರವರು ಸ್ಥಳ ಪರಿವೀಕ್ಷಣೆ ಮಾಡಿ ನೀಡಿದ ಸೂಚನೆಯಂತೆ ಟೆಂಡರ್‌ನಲ್ಲಿ ನಿಗಧಿಪಡಿಸಿದ್ದಕ್ಕಿಂತ ಹೆಚ್ಚುವರಿ ಪರಿಮಾಣಗಳನ್ನು ಹಾಗೂ ಕೆಲವು ಕೆಲಸಗಳನ್ನು ಹೆಚ್ಚುವರಿಯಾಗಿ ಗುತ್ತಿಗೆದಾರರು ನಿರ್ವಹಿಸಿದ್ದು ಈ ಬಗ್ಗೆ ಉಂಟಾಗಿರುವ ರೂ.13,36,169–00ಗಳ (ಇ.ಐ.ಆರ್.ಎಲ್ ಮತ್ತು ವರ್ಕ್‌ಸ್ಲಿಪ್

ಸೇರಿದಂತೆ) ಹೆಚ್ಚಿನ ಆರ್ಥಿಕ ಹೊರೆಗೆ ಅನುಮೋದನೆ ಕೋರಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಹೆಚ್ಚುವರಿಯಾದ ಈ ಮೊತ್ತವನ್ನು ಮಂಜೂರಾದ ಅಂದಾಜು ಮೊತ್ತಕ್ಕೆ ಹೋಲಿಸಿದಾಗ ಶೇ.30.54ರಷ್ಟು ಹೆಚ್ಚವರಿಯಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 34 ಅಪಿಬಂ 2008, ಬೆಂಗಳೂರು, ದಿನಾಂಕ: 17ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ, ಅಥಣಿ ತಾಲ್ಲೂಕು ಸುಟ್ಟಟ್ಟಿ(ಅಸಂಗಿ ತೋಟ) ಹತ್ತಿರ ಬಾಂದಾರ ನಿರ್ಮಾಣ ಕಾಮಗಾರಿಯಲ್ಲಿ ನಿರ್ವಹಿಸಲಾಗಿರುವ ಇ.ಐ.ಆರ್.ಎಲ್. ಹಾಗೂ ವರ್ಕ್‌ಸ್ಲಿಪ್‌ನ ಒಳಗೊಂಡ ಒಟ್ಟು ಮೊತ್ತ ರೂ.13,36,169–00ಗಳ (ಹದಿಮೂರು ಲಕ್ಷದ ಮೂವತ್ತಾರು ಸಾವಿರದ ನೂರ ಅರವತ್ತೊಂಭತ್ತು ರೂ.ಗಳು ಮಾತ್ರ) ಹೆಚ್ಚಿನ ಆರ್ಥಿಕ ಹೊರೆಗೆ ಸರ್ಕಾರವು ಅನುಮೋದನೆ ನೀಡಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಬ್ಲ್ಯೂಡಿ 560 ಎಫ್‌ಸಿ–1/09, ದಿನಾಂಕ 18/07/2009 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2202 **ಕೆ. ಸುಧಾಕರಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬಿಜಾಪುರ ಜಿಲ್ಲೆ ಬಸವನ ಬಾಗೇವಾಡಿ ತಾಲ್ಲೂಕಿನ ಅರೇಶಂಕರ ಮಧ್ಯಮ ನೀರಾವರಿ ಕೆರೆಯನ್ನು ಜಲ ಮೂಲವಾಗಿ ಪರಿಗಣಿಸಿ ಅರೇಶಂಕರ ಮತ್ತು 16 ಹಳ್ಳಿಗಳಿಗೆ ಕುಡಿಯುವ ನೀರಿನ ಯೋಜನೆಗಾಗಿ ಬಳಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/2009–10/3565 ದಿ: 19/06/09.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆ ಬಸವನ ಬಾಗೇವಾಡಿ ತಾಲ್ಲೂಕಿನ ಅರೇಶಂಕರ ಮಧ್ಯಮ ನೀರಾವರಿ ಕೆರೆಯನ್ನು ಜಲಮೂಲವಾಗಿ ಪರಿಗಣಿಸಿ ಅರೇಶಂಕರ ಮತ್ತು ಇತರೇ 16 ಹಳ್ಳಿಗಳಿಗೆ ಕುಡಿಯುವ ನೀರಿನ ಯೋಜನೆಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಿಂದ ಕೈಗೊಳ್ಳ ಲಾಗುತ್ತಿದ್ದು, ಸದರಿ ಯೋಜನೆಯಡಿಯಲ್ಲಿ 26.03 ಎಂ.ಸಿ.ಎಫ್.ಟಿ ನೀರು ಬೇಕಾಗಿದೆ. ಈ ಯೋಜನೆಯಡಿ ಕುಡಿಯುವ ನೀರಿನ ಶೇಕರಣೆಗಾಗಿ ಬೇಕಾಗುವ 26.03 ಎಂ.ಸಿ.ಎಫ್.ಟಿ ನೀರನ್ನು ಕೃಷ್ಣಾ ಮೇಲ್ದಂಡೆ ಯೋಜನೆಯ ಆಲಮಟ್ಟಿ ಎಡದಂಡೆ ಕಾಲುವೆಯಿಂದ ತಾತ್ಕಾಲಿಕವಾಗಿ ರೈಜಿಂಗ್ ಮೇನ್ ಹಾಕಿ ನೀರನ್ನು ಕೆರೆಗೆ ಪಂಪ್ ಮಾಡಿ ಬಳಸಿಕೊಳ್ಳುವ ಸಲುವಾಗಿ ಸಣ್ಣ ನೀರಾವರಿ ಇಲಾಖೆಯ ಉಸ್ತುವಾರಿಯಲ್ಲಿರುವ ಬಸವನ ಬಾಗೇವಾಡಿ ತಾಲ್ಲೂಕಿನ ಅರೇಶಂಕರ ಮಧ್ಯಮ ನೀರಾವರಿ ಕೆರೆಯನ್ನು "ಇಂಪೌಂಡಿಂಗ್ ರಿಜರ್ವಾಯರ್" ಎಂದು ಪರಿಗಣಿಸಲು ಅನುಮತಿ ನೀಡುವಂತೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 49 ಕೆಜಿದು 2008 ಬೆಂಗಳೂರು, ದಿನಾಂಕ: 14ನೇ ಸೆಪ್ಟೆಂಬರ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯು ಬಿಜಾಪುರ ಜಿಲ್ಲೆ ಬಸವನ ಬಾಗೇವಾಡಿ ತಾಲ್ಲೂಕಿನ ಅರೇಶಂಕರ ಹಾಗೂ ಇತರೇ 16 ಹಳ್ಳಿಗಳಿಗೆ ಕುಡಿಯುವ ನೀರಿನ ಯೋಜನೆಯನ್ನು ಕೈಗೊಳ್ಳುವ ಸಲುವಾಗಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯ ಅರೇಶಂಕರ ಮಧ್ಯಮ ನೀರಾವರಿ ಕೆರೆಯನ್ನು "ಇಂಪೌಂಡಿಂಗ್ ರಿಜರ್ವಾಯರ್" ಎಂಬುದಾಗಿ ಪರಿಗಣಿಸಲು ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರವು ಅನುಮೋದನೆ ನೀಡಿದೆ.

1. ಕುಡಿಯುವ ನೀರಿಗಾಗಿ ಬೇಕಾಗುವ 26.03 ಎಂ.ಸಿ.ಎಫ್.ಟಿ ನೀರನ್ನು ಕೃಷ್ಣಾ ಮೇಲ್ದಂಡೆ ಯೋಜನೆಯ ಆಲಮಟ್ಟಿ ಎಡದಂಡೆ ಕಾಲುವೆಯಿಂದ ತಾತ್ಪೂರ್ತಿಕವಾಗಿ ರೈಜಿಂಗ್ ಮೈನ್ ಹಾಕಿ ನೀರನ್ನು ಕೆರೆಗೆ ಪಂಪ್ ಮಾಡಿಕೊಳ್ಳಲು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯು ವ್ಯವಸ್ಥೆ ಮಾಡಿಕೊಳ್ಳತಕ್ಕದ್ದು.
2. ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು.
3. ಪ್ರಸ್ತಾಪಿತ ಯೋಜನೆ ಕೈಗೊಳ್ಳುವಾಗ ಕೆರೆಯ ಮೂಲ ಸ್ವರೂಪಕ್ಕೆ ಧಕ್ಕೆಯಾದಲ್ಲಿ ಅದರ ವೆಚ್ಚವನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯು ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2166 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ಮುರುಕಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ02/03/09 ರಂದು ಕೊನೆಗೊಂಡ ಪತ್ರ ಸಂಖ್ಯೆ:ಮುಸನೀ(ದ)/ಲೆಶಾ/ ಲೆಸ–1/3/ಭೂಸ್ವಾಧೀನ/2008–09/524.

**ಪ್ರಸ್ತಾವನೆ:**

ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರು ಮೇಲೆ ಓದಲಾದ ಪತ್ರದಲ್ಲಿ ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ಮುರುಕಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸೋಮೇದ್ವಾಪನಹಳ್ಳಿ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 01/10/1981
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 31/07/1985

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ರಾಮನಗರ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣ ದಾಖಲಿಸಿದ್ದು, ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ದಿನಾಂಕ 19/04/97ರಂದು ನೀಡಿದ ತೀರ್ಪಿನಲ್ಲಿ ಪರಿಹಾರ ಧನವನ್ನು ಪ್ರತಿ ಎಕರೆಗೆ ರೂ.22,500/–ಕ್ಕೆ ಹೆಚ್ಚಿಸಿದೆ. ಸದರಿ ತೀರ್ಪಿನ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಎಂಎಫ್ಎ ಸಂಖ್ಯೆ:3717/97 ದಾಖಲಿಸಿದ್ದು, ನ್ಯಾಯಾಲಯವು ದಿನಾಂಕ 12/06/03ರ ತೀರ್ಪಿನಲ್ಲಿ ಪ್ರಕರಣವನ್ನು ಮರು ಪರಿಶೀಲಿಸಲು ಕೆಳ ನ್ಯಾಯಾಲಯಕ್ಕೆ ನಿರ್ದೇಶನ ನೀಡಿದೆ. ಈ ಬಗ್ಗೆ ಮಾನ್ಯ ಸಿವಿಲ್ ನ್ಯಾಯಾಲಯವು ಪ್ರಕರಣವನ್ನು ಪುನರ್ ಪರಿಶೀಲಿಸಿ ದಿನಾಂಕ 09/12/04ರಲ್ಲಿ ನೀಡಿದ ತೀರ್ಪಿನಲ್ಲಿ ಪ್ರತಿ ಎಕರೆಗೆ ರೂ.22,500/–ಗಳ ಪರಿಹಾರ ಧನ ಹಾಗೂ ಪಂಪ್‌ಸೆಟ್/ಬಾವಿಗೆ ಹೆಚ್ಚುವರಿಯಾಗಿ ರೂ.20,970/–ಗಳ ಪರಿಹಾರ ಧನವನ್ನು ನೀಡಲು ಆದೇಶಿಸಿದೆ.

ಸಿವಿಲ್ ನ್ಯಾಯಾಲಯದ ತೀರ್ಪನ್ನು ಅನುಷ್ಠಾನಗೊಳಿಸುವಂತೆ ಕಂದಾಯ ಇಲಾಖೆಯು ಅಭಿಪ್ರಾಯ ಪಟ್ಟಿದೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 2/88 | 3717/97 | 92 & 99 | 9 – 01 | 8,22,996–00 |

- **ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 73 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ 10ನೇ ಸೆಪ್ಟೆಂಬರ್ 2009.**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ಮುರುಕಣಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸೋಮೇದ್ವಾಪನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.8,22,996–00ಗಳನ್ನು(ಎಂಟು ಲಕ್ಷದ ಇಪ್ಪತ್ತೆರಡು ಸಾವಿರದ ಒಂಬೈನೂರ ತೊಂಭತ್ತಾರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2167

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ಆರ್ಥಿಕ ಸಚಿವಾಲಯ**

**ವಿಷಯ :** ಶ್ರೀ ಹೆಚ್.ಪಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, (ಗುಪ್ತವಾರ್ತೆ), ಚಿಕ್ಕಮಗಳೂರು, ಇವರ ವಿರುದ್ಧದ ಅಭಿಯೋಜನಾ ಆದೇಶದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ :ಲೋಕ್/ಐಎನ್‌ವಿ (ಜಿ)/ ಎಂ–1/ಸಿಆರ್–1/2008/ಚಿಕ್ಕಮಗಳೂರು ದಿನಾಂಕ :4.10.2008

2) ತನಿಖಾಧಿಕಾರಿಯವರ ವರದಿ ಸಂಖ್ಯೆ :ಪಿವಿ/ಕಲೋ/ಚಿಮ/ಮೊ.ಸಂ.1/2008 ದಿನಾಂಕ :28.8.2008.

3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿಧಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

4) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ :ಲೋಕ್/ಐಎನ್‌ವಿ(ಜಿ)/ ಎಂ–1/ಸಿಆರ್–1/2008/ಚಿಕ್ಕಮಗಳೂರು ದಿನಾಂಕ :6.12.2008 8.4.2009 ಮತ್ತು 30.6.2009.

**ಪ್ರಸ್ತಾವನೆ:**

ಶ್ರೀ ಹೆಚ್. ಪಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ವಿರುದ್ಧ ಗುನ್ನೆ ಸಂಖ್ಯೆ:1/2008 ರಲ್ಲಿ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಯುಕ್ತ, ಚಿಕ್ಕಮಗಳೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ(3)ರ ಪತ್ರ ದಿನಾಂಕ:4.10.2008 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೇ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, (ಪೊಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಆಪಾದಿತ ಅಧಿಕಾರಿಯನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಉಲ್ಲೇಖಿತ ಕಾಯ್ದೆಯ 19ನೇಯ ಕಲಂ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ. ಮೇಲೆ ಓದಲಾಗಿರುವ ಕ್ರಮ ಸಂಖ್ಯೆ(6)ರ ಸರ್ಕಾರಿ ಆದೇಶದಲ್ಲಿ ಈ ಅಧಿಕಾರಿಯನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿತ್ತು. ಆದರೆ ತದನಂತರದ ಬೆಳವಣಿಗೆಯ ಹಿನ್ನೆಲೆಯಲ್ಲಿ ಪ್ರಕರಣವನ್ನು ಮತ್ತೊಮ್ಮೆ ಪರಿಶೀಲಿಸಲಾಗಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ(3)ರ ಪತ್ರ ದಿನಾಂಕ:4.10.2008 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಎ.ವಿ. ಸುರೇಶ್, ಬಿನ್. ವೆಂಕಟಾಚಲ, ವ್ಯಾಪಾರಿ, ಕನ್ನಿಕಾ ಪ್ಲಾಸ್ಟಿಕ್, ನಾಯ್ಡು ಬೀದಿ, ಚಿಕ್ಕಮಗಳೂರವರ ಫಿರ್ಯಾದು ದಿನಾಂಕ:7.1.2008.
2) ಪ್ರಥಮ ವರ್ತಮಾನ ವರದಿ: ಚಿಕ್ಕಮಗಳೂರು ಲೋಕಾಯುಕ್ತ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:1/2008 ದಿನಾಂಕ:7.1.2008.
3) ಪ್ರಾಯೋಗಿಕ ಪಂಚನಾಮೆ ದಿನಾಂಕ:7.1.2008 ರಂದು ಠಾಣೆಯಲ್ಲಿ ಜರುಗಿಸಿದ ವಹಿಸುವಿಕೆ ಪಂಚನಾಮೆ
4) ಟ್ರ್ಯಾಪ್ ಪಂಚನಾಮೆ ದಿನಾಂಕ:7.1.2008.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ:ಪಿಹೆಚ್ ಐ/ಸಿಎಂಇ/ಲೋಕ್ /138/07–08 ದಿನಾಂಕ:9.1.2009ದ
6) ಕೃತ್ಯ ನಡೆದ ಸ್ಥಳದ ನಕಾಶೆ: ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ನಂ.1, ಉಪವಿಭಾಗ, ಲೋಕೋಪಯೋಗಿ ಇಲಾಖೆ, ಚಿಕ್ಕಮಗಳೂರು ರವರ ಪತ್ರಸಂಖ್ಯೆ:ಸಕಾಇಂ/ನಂ.1/ಉವಿ/ಲೋಇ/ಚಿಮ/ಎನ್ನೆಲ್/ ಲೋಕಾಯುಕ್ತ/ನಕ್ಷೆ/2007–08/926 ದಿನಾಂಕ:14.1.2008
7) ಲಂಚ ಕೇಳಲು ಆಧಾರವಾದ ಕಡತ ಹಾಗೂ ದಾಖಲೆಗಳು
8) ಆಪಾದಿತರ ಸಮಜಾಯಿಷಿ ಹೇಳಿಕೆಗಳು:
   ಶ್ರೀ ಹೆಚ್.ಬಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರ ಹೇಳಿಕೆ ದಿನಾಂಕ:7.1.2008.
9) ಸಾಕ್ಷಿಗಳ ಪಟ್ಟಿ:

1) ಶ್ರೀ ಎ.ವಿ. ಸುರೇಶ್, ಫಿರ್ಯಾದಿರವರ ಹೇಳಿಕೆ ದಿನಾಂಕ:8.1.2008.
2) ಹೆಚ್.ವಿ. ಧಶರಥರಾಜು, ರವರ ಹೇಳಿಕೆ ದಿನಾಂಕ:7.1.2008
3) ಶ್ರೀ ಎಂ. ಓಂಕಾರಪ್ಪ, ಪಂಚ ಸಾಕ್ಷಿ ದಿನಾಂಕ:8.1.2008
4) ಶ್ರೀ ನರಹರಿ ಗಜಾನನ ಹೆಗಡೆ, ನೆರಳು ಮತ್ತು ಪಂಚ ಸಾಕ್ಷಿ ದಿನಾಂಕ:8.1.2008
5) ಶ್ರೀ ಎನ್. ಲೋಕೇಶ್, ಜ್ಯೂನಿಯರ್ ಇಂಜಿನಿಯರ್ ರವರ ಹೇಳಿಕೆ ದಿ: 8.1.2008.
6) ಶ್ರೀ ಸಿ. ಆನಂದ್, ಸಿ.ಹೆಚ್.ಸಿ., ದಿನಾಂಕ:7.1.2008
7) ಶ್ರೀ ಜೆ. ರಂಗೇಗೌಡ, ಸಿ.ಹೆಚ್.ಸಿ. ದಿನಾಂಕ:7.1.2008
8) ಶ್ರೀ ಬಿ.ಕೆ. ಪುಟ್ಟಸ್ವಾಮಾಚಾರ್, ಸಿ.ಹೆಚ್.ಸಿ.ರವರ ಹೇಳಿಕೆ ದಿನಾಂಕ:8.1.2008.

ತನಿಖಾಧಿಕಾರಿಯಾದ ಶ್ರೀ ಹೆಚ್.ಎನ್. ಪಂಚಾಕ್ಷರಪ್ಪ, ಪೊಲೀಸ್ ಇನ್ಸ್ ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಚಿಕ್ಕಮಗಳೂರು, ಇವರು ಶ್ರೀ ಹೆಚ್.ಬಿ. ಹಬೀಬುಲ್ಲಾಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ರವರ ವಿರುದ್ಧ ದಂಡನಾರ್ಹ ಪ್ರಕರಣವನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13 (1)(ಡಿ) ಜೊತೆಯಲ್ಲಿ 13(2) ರಡಿಯಲ್ಲಿ ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರು ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ:1/2008 ರಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಶ್ರೀ ಹೆಚ್. ಹಬೀಬುಲ್ಲಾಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ರವರು ಫಿರ್ಯಾದಿಯಾದ ಶ್ರೀ ಎ.ವಿ. ಸುರೇಶ್, ಬಿನ್ ವೆಂಕಟಾಚಲ, ವ್ಯಾಪಾರಿ ಕನ್ನಿಕಾ ಪ್ಲಾಸ್ಟಿಕ್ ನಾಯ್ಡು ಬೀದಿ, ಚಿಕ್ಕಮಗಳೂರು, ಇವರ ಅಂಗಡಿಗೆ ಭೇಟಿ ನೀಡಿ, ಸದರಿ ಅಂಗಡಿ ತಪಾಸಣೆ ಮಾಡದಿರಲು ರೂ. 15,000/– ಗಳ ಅಕ್ರಮ ಸಂಭಾವನೆಯನ್ನು ಕೊಡುವಂತೆಯೂ ಇಲ್ಲದಿದ್ದರೆ ದಂಡ ಹಾಕುವುದಾಗಿಯೂ ತಿಳಿಸಿ, ಅಕ್ರಮ ಸಂಭಾವನೆಗೆ ಒತ್ತಾಯಿಸಿರುತ್ತಾರೆ. ಫಿರ್ಯಾದಿರವರಿಗೆ ಲಂಚ ಕೊಡಲು ಇಷ್ಟವಿಲ್ಲದ್ದರಿಂದ ಸದರಿ ಆರೋಪಿತರ ಮೇಲೆ ಸೂಕ್ತ ಕಾನೂನು ಕ್ರಮ ಕೋರಿರುತ್ತಾರೆ.

ಮೇಲ್ಕಂಡ ಲಿಖಿತ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿಕ್ಕಮಗಳೂರುರವರು ಸದರಿ ಆರೋಪಿತ ಅಧಿಕಾರಿಯವರ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13 (2) ರಡಿಯಲ್ಲಿ ಮೊಕದ್ದಮೆ ಸಂಖ್ಯೆ:1/2008ರ ಪ್ರಕಾರ ಪ್ರಕರಣವನ್ನು ದಿನಾಂಕ:7.1.2008 ರಂದು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ಪಂಚ ಸಾಕ್ಷಿಗಳೊಡನೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿ ವರ್ಗದವರು ದಿನಾಂಕ:7.1.2008 ರಂದು ಕನ್ನಿಕಾ ಪ್ಲಾಸ್ಟಿಕ್ ನಾಯ್ಡು ಬೀದಿ, ಚಿಕ್ಕಮಗಳೂರು, ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ, ಶ್ರೀ ಹೆಚ್.ಬಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರು ಅಕ್ರಮ ಸಂಭಾವನೆಯಾದ ರೂ. 15,000/–ಗಳ ಲಂಚದ ಹಣವನ್ನು ಪಡೆಯುತ್ತಿರುವಾಗ ಲಂಚದ ಹಣದೊಡನೆ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಲು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಅದ್ದಿದಾಗ ದ್ರಾವಣವು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆಗೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಅಧಿಕಾರಿ/ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 15,000/ಗಳನ್ನು ಶ್ರೀ ಹೆಚ್.ಬಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರಿಂದ ಕನ್ನಿಕಾ ಪ್ಲಾಸ್ಟಿಕ್ ನಾಯ್ಡು ಬೀದಿ, ಚಿಕ್ಕಮಗಳೂರು ಈ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಹೆಚ್.ಬಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1) (ಡಿ)ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(ಸಿ) ರಡಿಯಲ್ಲಿ ಆಪಾಧಿತ ಅಧಿಕಾರಿಯಾದ ಶ್ರೀ ಹೆಚ್.ಬಿ. ಹಬೀಬುಲ್ಲಾ ಬೇಗ್, ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7 ಮತ್ತು 13 (1) (ಡಿ) ಜೊತೆಗೆ 13 (2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಲಾ 45 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ:31ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ವಕೀಲರ ಕ್ಷೇಮಾಭಿವೃದ್ಧಿ ನಿಧಿಗೆ ಲೆಕ್ಕ ಶೀರ್ಷಿಕೆ 2014–00–114–0–03–104 ((lawyers welfare fund)) ಅಡಿ ರೂ. 37.50 ಲಕ್ಷಗಳನ್ನು (ರೂಪಾಯಿ ಮೂವತ್ತೇಳು ಲಕ್ಷ ಐವತ್ತು ಸಾವಿರಗಳನ್ನು ಮಾತ್ರ) ಕರ್ನಾಟಕ ರಾಜ್ಯ ವಕೀಲರ ಪರಿಷತ್ತಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಹಣವನ್ನು ವಕೀಲರ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಯಲ್ಲಿ ಸ್ಪಷ್ಟಪಡಿಸಿರುವಂತೆ ಅಡ್ವೋಕೇಟ್ ಜನರಲ್, ಕರ್ನಾಟಕ, ಬೆಂಗಳೂರು ರವರಿಗೆ ಬಿಲ್ಲನ್ನು ಸಲ್ಲಿಸಿ ಹಣ ಪಾವತಿಸಿ ಕೊಳ್ಳಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ 3853 ದಿನಾಂಕ:29.8.2009ರಲ್ಲಿ ನೀಡಿರುವ ಸಹಮತಿ ಹಾಗೂ ಕಾರ್ಯದರ್ಶಿಗಳಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ:16.5.2008ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2130 **ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಸನೀಇ 40 ಅಪಿಬಂ 2009, ಬೆಂಗಳೂರು, ದಿನಾಂಕ:17ನೇ ಸೆಪ್ಟೆಂಬರ್, 2009**

ಗದಗ್ ಜಿಲ್ಲೆ, ರೋಣ ತಾಲ್ಲೂಕಿನ ಬೆಳಗೋಡ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಗೆ ಸರ್ಕಾರದ ಆದೇಶ ಸಂಖ್ಯೆ:ಸನೀಇ 40 ಅಪಿಬಂ 2009, ದಿನಾಂಕ:22.7.09 ರಂದು ಹೊರಡಿಸಲಾದ ಆದೇಶದ ಪ್ರಸ್ತಾವನೆಯ ಕಂಡಿಕೆ 4ರಲ್ಲಿ ಮತ್ತು ಆದೇಶದ ಭಾಗದಲ್ಲಿ ಗುತ್ತಿಗೆದಾರರ ಹೆಸರನ್ನು **"ಶ್ರೀ ವಿ.ಎಂ. ಹೆಬ್ಬಾಳ"** ಎಂಬುದರ ಬದಲಾಗಿ **"ಶ್ರೀ ವಿ.ಐ. ಶೆಟ್ಟಿ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2201 **ಕೆ. ಸುಧಾಕರಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಇಂಧನ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಇಎನ್ 302 ಎನ್‌ಸಿಇ 2007, ಬೆಂಗಳೂರು, ದಿನಾಂಕ:16ನೇ ಸೆಪ್ಟೆಂಬರ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಎನ್ 302 ಎನ್ ಸಿಇ 2007 ದಿನಾಂಕ:19.5.2009ರ ಪ್ರಸ್ತಾವನೆ ಮತ್ತು ಆದೇಶ ಭಾಗದಲ್ಲಿ **"ಹೊಸಗಡ್ಡೆ ಗ್ರಾಮ"** ಎಂಬುದರ ಬದಲಾಗಿ **"ಹೊಸಗದ್ದೆ ಹತ್ತಿರ ಕುಳಂಜೆ ಗ್ರಾಮ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2209 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಲಾ 39 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ:14ನೇ ಸೆಪ್ಟೆಂಬರ್, 2009**

ಸರ್ಕಾರದ ಆದೇಶ ಸಂಖ್ಯೆ: ಲಾ 39 ಎಲ್‌ಸಿಎಲ್ 2009, ದಿನಾಂಕ: 1.9.2009ರ ಆದೇಶದಲ್ಲಿನ ಕಂಡಿಕೆ (1)ರ ನೋಟರಿಗಳ ಕ್ರಮಸಂಖ್ಯೆ 3ರಲ್ಲಿರುವ ಹೆಸರನ್ನು ಶ್ರೀ ಜಿ.ಎನ್. ವೆಂಕಟರೇವಣಪ್ಪ ಎಂಬುದರ ಬದಲಾಗಿ ಶ್ರೀ ಜಿ.ಎನ್. ವೆಂಕಟರವಣಪ್ಪ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2222 **ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.